# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 269 |
| ಸದಸ್ಯರ ಹೆಸರು | : | ಶ್ರೀ ಎಸ್. ನಾಗರಾಜ್(ಸಂದೇಶ್ ನಾಗರಾಜ್)(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 02-02-2021 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ನಗರದ ರಿಂಗ್ ರಸ್ತೆಯಲ್ಲಿ ರಾತ್ರಿ ವೇಳೆ ಬೀದಿ ದೀಪಗಳನ್ನು(ಹೈಮಾಸ್ಟ್ / ಸೋಡಿಯಂ ವೇಪರ್ /ಎಲ್.ಇ.ಡಿ) ಸರಿಯಾಗಿ ಅಳವಡಿಸದೇ ಇರುವುದರಿಂದ ಕತ್ತಲಿನ ವಾತಾವರಣದಲ್ಲಿ ಸಂಚರಿಸಲು ಸಾರ್ವಜನಿಕರು ಭಯಭೀತರಾಗಿ ತೊಂದರೆಗೆ ಒಳಗಾಗಿರುವುದು ರಿಂಗ್ ರಸ್ತೆಯಲ್ಲಿ ಅಪರಾಧ ಪ್ರಕರಣಗಳು ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ರಿಂಗ್ ರಸ್ತೆಯಲ್ಲಿ ವ್ಯವಸ್ಥಿತವಾಗಿ ರಸ್ತೆ ಉದ್ದಕ್ಕೂ ಹಾಗೂ ಹೈಮಾಸ್ಟ್ / ಸೋಡಿಯಂ ವೇಪರ್, ಎಲ್.ಇ.ಡಿ ಬೀದಿ ದೀಪಗಳನ್ನು ಅಳವಡಿಸಿ ಬೆಳಗಿಸಲು ಕ್ರಮ ಜರುಗಿಸಲಾಗುವುದೇ; | ಸರ್ಕಾರದ ಪತ್ರ ಸಂಖ್ಯೆ: ನಅಇ 4 ಮೈಅಪ್ರಾ 2019, ದಿನಾಂಕ 26.05.2020 ರಲ್ಲಿ, ಹೊರವರ್ತುಲ ರಸ್ತೆಯಲ್ಲಿರುವ ಒಟ್ಟು 2135 ವಿದ್ಯುತ್ ಕಂಬಗಳ ಪೈಕಿ ಮೈಸೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಬರುವ 1267 ವಿದ್ಯುತ್ ಕಂಬಗಳ ನಿರ್ವಹಣೆ ಮತ್ತು ವಿದ್ಯುಚ್ಛಕ್ತಿ ಬಿಲ್ಲನ್ನು ಪಾಲಿಕೆ ವತಿಯಿಂದ ಪಾವತಿಸಲು ಮತ್ತು ಉಳಿಕೆ 868 ವಿದ್ಯುತ್ ಕಂಬಗಳನ್ನು ಮೈಸೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸುವವರೆಗೆ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ನಿರ್ವಹಣೆ ಮತ್ತು ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ನಿರ್ದೇಶನ ನೀಡಲಾಗಿದೆ.<br><br>ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯ ಹೊರವರ್ತುಲ ರಸ್ತೆಯ ಬೀದಿ ದೀಪಗಳ ವಾರ್ಷಿಕ ನಿರ್ವಹಣಾ ದುರಸ್ತಿ ಕಾಮಗಾರಿಗಾಗಿ ಬೋಗಾದಿ ಕೂಡು ರಸ್ತೆಯಿಂದ, ನಂಜನಗೂಡು-ಊಟಿ ಮುಖ್ಯರಸ್ತೆ ಹಾಗೂ |

| | | | |
|---|---|---|---|
| | | | ಬನ್ನೂರು ಮುಖ್ಯ ರಸ್ತೆಯವರೆಗೆ ಅಂದಾಜು ಪಟ್ಟಿಯನ್ನು ಪ್ರಾಧಿಕಾರದ ಹಂತದಲ್ಲಿ ಸಿದ್ಧಪಡಿಸಲಾಗುತ್ತಿದೆ.<br><br>ಮುಂದುವರೆದು, ಹಾಲಿಯಿರುವ ಸಾಂಪ್ರದಾಯಿಕ ಬೀದಿ ದೀಪಗಳನ್ನು ಬದಲಿಸಿ ಕೇಂದ್ರಿಕೃತ ಚಾಲನೆ ಮತ್ತು ನಿರ್ವಹಣೆಯುಳ್ಳ ಇಂಧನ ಕ್ಷಮತೆ ಎಲ್.ಇ.ಡಿ ಬೀದಿ ದೀಪಗಳನ್ನು ಅಳವಡಿಸುವ ಕಾಮಗಾರಿಯಡಿಯಲ್ಲಿ ಸದರಿ ರಸ್ತೆಯಲ್ಲಿರುವ ಬೀದಿ ದೀಪಗಳನ್ನು ಬದಲಾಯಿಸುವ ಕಾಮಗಾರಿಯನ್ನು ಮೈಸೂರು ಮಹಾನಗರ ಪಾಲಿಕೆಯಿಂದ ಕೈಗೊಳ್ಳಲಾಗುತ್ತಿದ್ದು, ಟೆಂಡರ್ ಪ್ರಕ್ರಿಯೆ ಹಂತದಲ್ಲಿರುತ್ತದೆ. |
| ಇ) | ರಿಂಗ್ ರಸ್ತೆಯ ಎರಡೂ ಬದಿಯಲ್ಲಿ ಸಾರ್ವಜನಿಕರು ಕಟ್ಟಡ ತ್ಯಾಜ್ಯ ಹಾಗೂ ಇತರೆ ತ್ಯಾಜ್ಯವನ್ನು ತಂದು ಸುರಿಯುತ್ತಿದ್ದು, ರಸ್ತೆಯ ಎರಡೂ ಬದಿ ತ್ಯಾಜ್ಯದ ರಾಶಿಗಳಿದ್ದು, ಇವುಗಳನ್ನು ಇಲ್ಲಿಂದ ವಿಲೇವಾರಿ ಮಾಡಲು ಹಾಗೂ ಸಾರ್ವಜನಿಕರು ತ್ಯಾಜ್ಯವನ್ನು ತಂದು ಇಲ್ಲಿ ಸುರಿಯದಂತೆ ಕಟ್ಟಳೆ ಮಾಡಿ ಸಿ.ಸಿ ಟಿ.ವಿ ಕ್ಯಾಮೆರಾ ಅಳವಡಿಸಲು ಕ್ರಮ ಜರುಗಿಸಲಾಗುವುದೇ: | | ರಿಂಗ್ ರಸ್ತೆಯ ಎರಡೂ ಬದಿಯಲ್ಲಿ ಎಸೆದಿರುವ ತ್ಯಾಜ್ಯವನ್ನು ತೆರವುಗೊಳಿಸಿ, ಇನ್ನು ಮುಂದೆ ಸದರಿ ಜಾಗಗಳಲ್ಲಿ ತ್ಯಾಜ್ಯ ಸುರಿಯುವವರ ವಿರುದ್ಧ ದಂಡ ವಿಧಿಸಲು ಮೈಸೂರು ಮಹಾನಗರ ಪಾಲಿಕೆಯ ವತಿಯಿಂದ ಕ್ರಮವಹಿಸಲಾಗುತ್ತಿದೆ. ಮುಂದಿನ ದಿನಗಳಲ್ಲಿ ಮೈಸೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಉತ್ಪತ್ತಿಯಾಗುವ ಕಟ್ಟಡ ತ್ಯಾಜ್ಯವನ್ನು ಸಂಸ್ಕರಿಸುವ ವ್ಯವಸ್ಥೆ ಮಾಡಲಾಗುವುದು. |
| ಈ) | ರಿಂಗ್ ರಸ್ತೆಯ ಎರಡೂ ಬದಿಯಲ್ಲಿ ಸ್ಥಳೀಯ ಆಲ, ಬೇವು, ಸಂಪಿಗೆ, ನೇರಳೆ ಮೊದಲಾದ ಮರಗಿಡಲಗಳನ್ನು ವ್ಯವಸ್ಥಿತವಾಗಿ ಬೆಳೆಸಲು ಮಧ್ಯದಲ್ಲಿ ಡಿವೈಡರ್ ಜಾಗದಲ್ಲಿ ಹೂವಿನ ಗಿಡಗಳನ್ನು ಬೆಳೆಸಲು ಕ್ರಮ ಜರುಗಿಸಲಾಗುವುದೇ? | | ರಸ್ತೆಯ ಎರಡು ಬದಿಯಲ್ಲಿ ವಿವಿಧ ಜಾತಿಯ ಗಿಡಗಳನ್ನು ಕಳೆದ ಎರಡು ವರ್ಷಗಳಿಂದಲೂ ಬೆಳೆಸಲಾಗುತ್ತಿದೆ ಹಾಗೂ ಡಿವೈಡರ್ ಜಾಗದಲ್ಲಿ ಹೂವಿನ ಗಿಡಗಳನ್ನು ನೆಡಲು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಕ್ರಮವಹಿಸಲಾಗಿದೆ. |

**ಸಂಖ್ಯೆ: ನಅಇ 43 ಮೈಅಪ್ರಾ 2021(ಇ)**

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು